# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 182 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕೆ.ಟಿ. ಶ್ರೀಕಂಠೇಗೌಡ<br>(ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 16.02.2022 |
| ಉತ್ತರಿಸುವ ಸಚಿವರು | ವಸತಿ ಮತ್ತು ಮೂಲಸೌಲಭ್ಯ<br>ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ನಿವೇಶನ ಬೇಡಿಕೆ ಸಮೀಕ್ಷೆ ಸಂಬಂಧ ಕೆ.ಹೆಚ್.ಬಿ. ಯಿಂದ ರಾಜ್ಯಾದ್ಯಂತ ಯಾವಾಗ ಪ್ರಕಟಣೆ ನೀಡಲಾಯಿತು; ಇದರಿಂದ ಬಂದ ಹಣ ಎಷ್ಟು? ಈ ಹಣವನ್ನು ಜನರಿಗೆ ಯಾವಾಗ ಹಿಂತಿರುಗಿಸಿ ನೀಡಲಾಗುವುದು. (ಜಿಲ್ಲಾವಾರು ಮಾಹಿತಿ ನೀಡುವುದು) | ಅನುಬಂಧದಲ್ಲಿ ಮಾಹಿತಿ ನೀಡಲಾಗಿದೆ. |
| ಆ | ವಿವೇಚನಾ ಕೋಟಾ ಅಂದರೇನು; ಕೆ.ಹೆಚ್.ಬಿ.ಯಲ್ಲಿ ಈ ಖೋಟಾ ಹಾಲಿ ಜಾರಿಯಲ್ಲಿ ಇದೆಯೇ; | ವಿವೇಚನಾ ಕೋಟಾ ಎಂದರೆ-ಕರ್ನಾಟಕ ಗೃಹ ಮಂಡಳಿಯ ಹಂಚಿಕೆ ನಿಯಮಾವಳಿ-1983ರ ನಿಯಮ 4 ಮತ್ತು 9ಎ ರಡಿಯಲ್ಲಿ ಸರ್ಕಾರದ ಅನುಮೋದನೆ ಪಡೆದು ಮನೆ ಮತ್ತು ನಿವೇಶನಗಳನ್ನು ಹಂಚಿಕೆ ಮಾಡುವುದಾಗಿರುತ್ತದೆ. ಸದರಿ ನಿಯಮಗಳನ್ವಯ ಮೀಸಲಿರಿಸಿದ ಮನೆ ಮತ್ತು ನಿವೇಶನಗಳನ್ನು ದಿನಾಂಕ:21.12.2017 ರಂದು ಹೊರಡಿಸಲಾಗಿರುವ ತಿದ್ದುಪಡಿ ನಿಯಮಾವಳಿಗಳನ್ವಯ ಕೆಳಕಂಡ ವರ್ಗದವರಿಗೆ ಹಂಚಿಕೆ ಮಾಡಬೇಕಾಗಿರುತ್ತದೆ. |

ನಿಯಮ 4ರ ಅಡಿಯಲ್ಲಿನ ಸ್ವತ್ತುಗಳ ಹಂಚಿಕೆಗೆ ಸಂಬಂಧಿಸಿದಂತೆ

| ಕ್ರ. ಸಂ. | ವರ್ಗ | ಹಂಚಿಕೆ ವಿವರ | ಶೇಕಡ ವಾರು |
|---|---|---|---|
| 1 | ಎ | ಸಾರ್ವಜನಿಕ ಜೀವನ (Public life) ದಲ್ಲಿ ತೊಡಗಿರುವ ವ್ಯಕ್ತಿಗಳಿಗೆ ಮಂಡಳಿ ಕೋಟಾದಲ್ಲಿ. | 25% |
| 2 | ಬಿ(1) | ಕ್ರೀಡಾ ಕ್ಷೇತ್ರದಲ್ಲಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಶಸ್ತಿ ಪಡೆದ ವ್ಯಕ್ತಿಗಳಿಗೆ. | 20% |
| 3 | ಬಿ(2) | ಸಾಂಸ್ಕೃತಿಕ ಹಾಗೂ ಸಾರ್ವಜನಿಕ ಕ್ಷೇತ್ರಗಳಲ್ಲಿ ಗುರ್ತಿಸಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಶಸ್ತಿ ಪಡೆದ ವ್ಯಕ್ತಿಗಳಿಗೆ ಹಂಚಿಕೆ ಮಾಡಲಾಗುವುದು. | 20% |

| | | | |
|---|---|---|---|
| 4 | ಬಿ(3) (ಎ) | 10 ವರ್ಷಗಳಿಗೂ ಕಡಿಮೆಯಿಲ್ಲದಂತೆ ಕರ್ನಾಟಕದಲ್ಲಿ ವಾಸವಿರುವ ಸ್ವಾತಂತ್ರ್ಯ ಹೋರಾಟಗಾರರಿಗೆ. | 10% |
| 5 | (ಬಿ) | ರಾಜ್ಯ ಸರ್ಕಾರದ ಸೇವೆಯಲ್ಲಿರುವಾಗಲೇ ಮೃತಪಟ್ಟಿರುವ ನೌಕರರ ಅವಲಂಬಿತರಿಗೆ. | |
| | (ಸಿ) | ಸೈನಿಕರು ಹಾಗೂ ಮಾಜಿ ಸೈನಿಕರು. | |
| 6 | ಸಿ | ಸಾರ್ವಜನಿಕ ಜೀವನ (Public life) ದಲ್ಲಿ ತೊಡಗಿರುವ ವ್ಯಕ್ತಿಗಳಿಗೆ ಸರ್ಕಾರದ ಕೋಟಾದಲ್ಲಿ | 25% |

### 9ಎ ಅಡಿಯಲ್ಲಿನ ಸ್ವತ್ತುಗಳ ಹಂಚಿಕೆಗೆ ಸಂಬಂಧಿಸಿದಂತೆ

| | | | |
|---|---|---|---|
| 7 | ಎ | ಹರಾಜು ಮುಖಾಂತರ ವಿಲೇವಾರಿ ಮಾಡಲಾಗುವ ಸ್ವತ್ತುಗಳು | 40% |
| 8 | ಎ ಬಿ(1) | ಕ್ರೀಡಾ ಕ್ಷೇತ್ರದಲ್ಲಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಶಸ್ತಿ ಪಡೆದ ವ್ಯಕ್ತಿಗಳಿಗೆ | 20% |
| 9 | ಎ ಬಿ(2) | ಹಲವಾರು ಸಾಂಸ್ಕೃತಿಕ ಹಾಗೂ ಸಾರ್ವಜನಿಕ ಕ್ಷೇತ್ರಗಳಲ್ಲಿ ಗುರ್ತಿಸಿ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಶಸ್ತಿ ಪಡೆದ ವ್ಯಕ್ತಿಗಳಿಗೆ ಹಂಚಿಕೆ ಮಾಡಲಾಗುವುದು. | 20% |
| | ಎ (3)ಎ<br><br>(3)ಬಿ<br><br>(3)ಸಿ | 10 ವರ್ಷಗಳಿಗೂ ಕಡಿಮೆಯಿಲ್ಲದಂತೆ ಕರ್ನಾಟಕದಲ್ಲಿ ವಾಸವಿರುವ ಸ್ವಾತಂತ್ರ್ಯ ಹೋರಾಟಗಾರರಿಗೆ.<br><br>ರಾಜ್ಯ ಸರ್ಕಾರದ ಸೇವೆಯಲ್ಲಿರುವಾಗಲೇ ಮೃತಪಟ್ಟಿರುವ ನೌಕರರ ಅವಲಂಬಿತರಿಗೆ.<br><br>ಸೈನಿಕರು ಹಾಗೂ ಮಾಜಿ ಸೈನಿಕರು | 10% |
| 10 | 9ಸಿ | ಸಾರ್ವಜನಿಕ ಜೀವನ (Public life) ದಲ್ಲಿ ತೊಡಗಿರುವ ವ್ಯಕ್ತಿಗಳಿಗೆ | 10% |

ಈ ಕೋಟಾ ಹಾಲಿ ಜಾರಿಯಲ್ಲಿದೆ. ಆದರೆ, ಶ್ರೀ ಭೋಜಪ್ಪ ಮತ್ತು ಇತರರು 2017ರ ಹೊಸ ಮಾರ್ಗಸೂಚಿಯಲ್ಲಿನ ಹಂಚಿಕೆ ನಿಯಮ 4ರ 'A' ಮತ್ತು 'C' ಹಾಗೂ 9A ಪ್ರವರ್ಗ 'C' ಅಡಿಯಲ್ಲಿ ಬರುವ "ಸಾರ್ವಜನಿಕ ಜೀವನ" (Public LIfe) ದಲ್ಲಿ ತೊಡಗಿರುವ ವ್ಯಕ್ತಿಗಳಿಗೆ ಹಂಚಿಕೆ ಮಾಡುವ ಮಂಡಳಿ ಕೋಟಾ ಪ್ರವರ್ಗ 'A' ಮತ್ತು ಸರ್ಕಾರ ಕೋಟಾ 'C' ಸ್ವತ್ತುಗಳ ಹಂಚಿಕೆ ಸಂಬಂಧ ಕರ್ನಾಟಕ ರಾಜ್ಯದ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ WP No. 8340/2018 (GM-RES) ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ: 18.10.2019 ರಂದು ಈ ಕೆಳಕಂಡಂತೆ ಆದೇಶವನ್ನು ನೀಡಿರುತ್ತದೆ.

"The petition is allowed, The Categories "A" and "C" in the table in Regulation 4 and Category "C" in the table in Regulation 9A as well as explanation (a) to both regulation are hereby struck down being un-constitutional."

| | | |
|---|---|---|
| | | ಮಾನ್ಯ ನ್ಯಾಯಾಲಯದ ಆದೇಶದಂತೆ, ಮೇಲಿನ ಕೋಷ್ಟಕದಲ್ಲಿನ ಕ್ರಮಸಂಖ್ಯೆ (1, 6 ಮತ್ತು 10) ರಲ್ಲಿನ ಕೋಟಾದಡಿ ಲಭ್ಯವಿರುವ ಸ್ವತ್ತುಗಳನ್ನು ಹಂಚಿಕೆ ಮಾಡುತ್ತಿಲ್ಲ. |
| ಇ | ಈ ಕೋಟಾದಲ್ಲಿ ಇಲ್ಲಿಯವರೆಗೆ ಎಷ್ಟು ನಿವೇಶನಗಳನ್ನು ಹಂಚಿಕೆ ಮಾಡಲಾಗಿದೆ; ಹೆಸರು, ವಿಳಾಸ, ನಿವೇಶನದ ವಿಳಾಸದೊಂದಿಗೆ ವರ್ಷವಾರು ವಿವರವಾದ ಮಾಹಿತಿ ನೀಡುವುದು. | ದಿನಾಂಕ: 21.12.2017 ರ ತಿದ್ದುಪಡಿ ನಿಯಮಗಳನ್ವಯ ಈವರೆಗೂ ವಿವೇಚನಾ ಕೋಟಾದಡಿ ಹಂಚಿಕೆಯನ್ನು ಮಾಡಿರುವುದಿಲ್ಲ. |

(ಸಂಖ್ಯೆ: ವಇ 40 ಕಗ್ರುಮಂ 2022)

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು.

ಅನುಬಂಧ

# DEMAND SURVEY NOTIFICATIONS FROM 2017 TO 2021

| SLNO | NOTIFICATION YEAR | DISTRICT | PROJECT | ID AMT |
|---|---|---|---|---|
| 1 | 2013 | DAVANAGERE | HARAPPANA HALLI | 8260000 |
| 2 | 2017 | CHAMARAJANAGAR | HANOOR | 6986000 |
| 3 | 2018 | BIDAR | GUNNALLI | 9099000 |
| 4 | 2018 | BIDAR | KALWADI-BHALKI | 12814000 |
| 5 | 2018 | BIDAR | MALKAPURA | 20736000 |
| 6 | 2018 | MYSORE | RAMANAHALLI VILLAGE & BILIKERE-MANUGANAHALLI | 50409000 |
| 7 | 2019 | BANGALORE-URBAN | SURYANAGARA-IV PHASE | 368780000 |
| 8 | 2020 | BANGALORE-RURAL | BILIKERE-HOSKOTE | 20824000 |
| 9 | 2021 | BELGAUM | GOKAK TOWN | 37450000 |
| 10 | 2021 | BELLARY | DEVALAPURA, SIRIGUPPA | 13450000 |
| 11 | 2021 | BELLARY | KOLAGAL PHASE II | 27300000 |
| 12 | 2021 | GADAG | BETAGERI NARASAPURA | 25410000 |
| 13 | 2021 | GADAG | LAKSHMESWARA DESAI BANA | 6290000 |
| 14 | 2021 | GADAG | NARAGUNDA SOMAPURA | 17910000 |
| 15 | 2021 | RAMANAGARA | HAROHALLY, KANAKAPURA | 61570000 |
| 16 | 2021 | DAVANAGERE | HARIHARA SHERAPURA LAYOUT | 21750000 |
| | | | TOTAL | 709038000 |

ಬಡಾವಣೆಗಳನ್ನು ನಿರ್ಮಿಸಿ ಲಾಟರಿ ಮುಖಾಂತರ ಹಂಚಿಕೆ ಮಾಡಿದ ನಂತರ ಹಂಚಿಕೆಯಾಗದೇ ಉಳಿದಿರುವ ಅರ್ಜಿದಾರರುಗಳಿಗೆ ಅವರು ಪಾವತಿಸಿರುವ ಮೊತ್ತವನ್ನು ಮರುಪಾವತಿಸಲಾಗುವುದು

ಗೃಹ ಆಯುಕ್ತರು
ಕರ್ನಾಟಕ ಗೃಹ ಮಂಡಳಿ
ಬೆಂಗಳೂರು